| ಕರ್ನಾಟಕ ವಿಧಾನ ಪರಿಷತ್ತು | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 912 |
| ಸದಸ್ಯರ ಹೆಸರು: | ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ (ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ: | 20-09-2021 |
| ಉತ್ತರಿಸುವವರು: | ಮಾನ್ಯ ಅರಣ್ಯ ಹಾಗೂ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಅರಣ್ಯ ಇಲಾಖೆಯಲ್ಲಿ ಸರ್ಕಾರ ರಚಿಸಿರುವ ಸಮಿತಿಯ ವರದಿಯಲ್ಲಿ ಜೆ.ಬಿ.ಐ.ಸಿ. ಹುದ್ದೆಗಳನ್ನು ರಿಕ್ತ ಸ್ಥಾನವೆಂದು ಪರಿಗಣಿಸಲು ಆಸ್ಪದ ಇಲ್ಲವೇ; ಹಾಗಿದ್ದಲ್ಲಿ, ಈ ವಿಷಯದ ಬಗ್ಗೆ ಮಾಹಿತಿ ಒದಗಿಸುವುದು. | -ಇಲ್ಲ-<br>ಅರಣ್ಯ ಇಲಾಖೆಯು 1983-84ನೇ ಸಾಲಿನಿಂದ 1992-93ನೇ ಸಾಲಿನವರೆಗೆ ವಿಶ್ವ ಬ್ಯಾಂಕ್ ನೆರವಿನ ಸಾಮಾಜಿಕ ಅರಣ್ಯ ಯೋಜನೆಯನ್ನು ಅನುಷ್ಠಾನಗೊಳಿಸಿದ್ದು, ಈ ಯೋಜನೆಯ ಅನುಷ್ಠಾನಕ್ಕೆ ವಿವಿಧ ಹಂತದಲ್ಲಿ 1314 ತಾತ್ಕಾಲಿಕ ಹುದ್ದೆಗಳನ್ನು ಸೃಜಿಸಲಾಗಿತ್ತು. ಈ ಯೋಜನೆಯು ನಂತರ ಜೆ.ಬಿ.ಐ.ಸಿ ನೆರವಿನ ಪೂರ್ವಪುಸ್ಥ ಭೂಮಿಯ ಅರಣ್ಯೀಕರಣ ಮತ್ತು ಪರಿಸರ ಯೋಜನೆಯಾಗಿ ದಿನಾಂಕ:31.03.2002 ರಂದು ಮುಕ್ತಾಯಗೊಂಡಿತ್ತು. ಈ ಹುದ್ದೆಗಳನ್ನು ಯೋಜನೆ ಲೆಕ್ಕ ಶೀರ್ಷಿಕೆಯಡಿ ಸೃಜಿಸಲಾಗಿದ್ದು, ವೇತನ ಮತ್ತು ಭತ್ಯೆಗಳನ್ನು ಯೋಜನೆ ಲೆಕ್ಕ ಶೀರ್ಷಿಕೆಯಡಿ ಪಾವತಿಸಲಾಗುತ್ತಿತ್ತು. ಸರ್ಕಾರದ ಆದೇಶ ಸಂಖ್ಯೆ: ಅಪಜೀ 165 ಎಫ್‌ಎಪಿ 2002 ದಿ:14.02.2003ರಲ್ಲಿ ಮೇಲ್ಕಂಡ ಹುದ್ದೆಗಳಿಗೆ ಪಾವತಿ ಮಾಡಲಾಗುತ್ತಿದ್ದ ವೇತನ ಮತ್ತು ಭತ್ಯೆಗಳನ್ನು ಪಾವತಿಸಲು ಯೋಜನೆ ಲೆಕ್ಕ ಶೀರ್ಷಿಕೆಯಿಂದ ಯೋಜನೇತರ ಲೆಕ್ಕ ಶೀರ್ಷಿಕೆಯಡಿಯಲ್ಲಿ ಬದಲಾಯಿಸಲಾಗಿರುತ್ತದೆ. ಹೀಗಾಗಿ ವೃತ್ತದವರು ಮೇಲಿನ ಸರ್ಕಾರಿ ಆದೇಶದಂತೆ ರಿಕ್ತ ಸ್ಥಾನಗಳೆಂದು ಪರಿಗಣಿಸಲು ನಿಯಮಾನುಸಾರ ಆಸ್ಪದವಿರುವುದಿಲ್ಲ. |
| ಆ. | ಬೆಂಗಳೂರು ವೃತ್ತದ ಜೇಷ್ಠತಾ ಪಟ್ಟಿಯ ಅನುಬಂಧ-1 ರಲ್ಲಿ ಜೆ.ಬಿ.ಐ.ಸಿ. ಯೋಜನೆಯ 42 ಹುದ್ದೆಗಳು ಸೇರಿದಂತೆ ರಿಕ್ತ ಸ್ಥಾನಗಳೆಂದು ಸರ್ಕಾರ ಪರಿಗಣಿಸಿರುವುದು ನಿಜವೇ? (ಈ ಹುದ್ದೆಗಳನ್ನು ರಿಕ್ತ ಸ್ಥಾನವೆಂದು ಪರಿಗಣಿಸಲು ಕಾರಣಗಳನ್ನು ಒದಗಿಸುವುದು) | -ಇಲ್ಲ-<br>ಆದರೆ, ಈ ಹುದ್ದೆಗಳು 1983-84ನೇ ಸಾಲಿನಲ್ಲಿ ಸಾಮಾಜಿಕ ಅರಣ್ಯ ಅಭಿವೃದ್ಧಿ ಯೋಜನೆಯಡಿ ಮೂಲತಃ ಸೃಜನೆಯಾಗಿ ಜೆ.ಬಿ.ಐ.ಸಿ ಯೋಜನೆ ಜಾರಿಗೆ ಬಂದಾಗ ಸಾಮಾಜಿಕ ಅರಣ್ಯ ಯೋಜನೆಯಿಂದ ಪುನರ್ ನಾಮಕರಣ ಮಾಡಿ ಜೆ.ಬಿ.ಐ.ಸಿ ಯೋಜನೆಯ ಹುದ್ದೆಗಳೆಂದು ಮುಂದುವರೆಸಲಾಗಿರುತ್ತದೆ.<br>ಉಪ ವಲಯ ಅರಣ್ಯಾಧಿಕಾರಿ ಹಾಗೂ ಮೋಜಣಿದಾರರ ಅಂತಿಮ ಜೇಷ್ಠತಾ ಪಟ್ಟಿಯ ಅನುಬಂಧ-1ರ ದಿನಾಂಕ:27-04-1978 ರಿಂದ 06-02-1995 ರವರೆಗಿನ ಬ್ಲಾಕ್ ಸಂಖ್ಯೆ:01ರಲ್ಲಿ ವಿಶ್ವ ಬ್ಯಾಂಕ್ ನೆರವಿನ ಸಾಮಾಜಿಕ ಅರಣ್ಯ |

| | | |
|---|---|---|
| | | ಯೋಜನೆಯಡಿಯಲ್ಲಿ ಬೆಂಗಳೂರು ವೃತ್ತದಲ್ಲಿ ಮಂಜೂರಾದ 42 ಉಪ ವಲಯ ಅರಣ್ಯಾಧಿಕಾರಿ ಹಾಗೂ ಮೋಜಣಿದಾರರ ಹುದ್ದೆಗಳನ್ನು ಅಂದಿನ 33:67 ಅನುಪಾತದಲ್ಲಿ ಗಣನೆಗೆ ತೆಗೆದುಕೊಳ್ಳಲಾಗಿರುತ್ತದೆ. ಆದರೆ, 2003ನೇ ಸಾಲಿನ ಅವಧಿಯಲ್ಲಿ ಜಿ.ಬಿ.ಐ.ಸಿ. ಯೋಜನೆಯಡಿಯಲ್ಲಿ ರಿಕ್ತ ಸ್ಥಾನಗಳನ್ನು ಪರಿಗಣಿಸಲು ಅವಕಾಶವಿರುವುದಿಲ್ಲ. |

ಕಡತ ಸಂಖ್ಯೆ: ಅಪಜೀ 188 ಅಅಸೇ 2021

(ಉಮೇಶ ವಿ.ಕತ್ತಿ)
ಅರಣ್ಯ ಹಾಗೂ ಆಹಾರ, ನಾಗರಿಕ ಸರಬರಾಜು
ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು.